ಬಗ್ಗೆ ನಿಮ್ಮ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ, ಆದೇಶ ಮುನ್ನಾ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು. ಷೆಡ್ಯೂಲ್‌ನಲ್ಲಿನ ಸ್ಥಿರಾಸ್ತಿಗಳನ್ನು ಖರೀದಿಸುವವರು/ ಆಸ್ತಿಗಳನ್ನು ಹೊಂದುವವರು ಈ ಆದೇಶ ಪೂರ್ವ ಜಪ್ತಿ ಆದೇಶಕ್ಕೆ ಒಳಪಟ್ಟು ಮಾಡಿರುತ್ತಾರೆಂದು ತಿಳಿಯುವುದು.

**ಷೆಡ್ಯೂಲ್–ಪ್ರತಿವಾದಿಗಳ ಆಸ್ತಿಗಳು**

All that piece and parcel of immovable property bearing No.53 Old New No.53/1 Muniswamappa Road, M.R. Palya, Bangalore.

Measuring 63* (34+32)/2 feet and bounded on the:

East by: Conservancy Land

West by: Road

North by: Private Property

South by: Private Property

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:10.02.2009ರಂದು ಹೊರಡಿಸಿದೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.,441)
ದಾವಾ ಪಂಚಾಯಿತಿ ನ್ಯಾಯಾಲಯ, ಅಮಾನತ್ ಹೌಸ್,
ಶಿವಾಜಿನಗರ, ಬೆಂಗಳೂರು–560001.

ಪಿ.ಡಿ.20

**IN THE COURT OF THE PRL.CIVIL JUDGE (JR.DN.) & JMFC, HARIHAR**

**NOTIFICATION**

It is notified that the following unclaimed property bearing vehicle number in the following case has not been claimed its ownership by anybody.

| Sl. No. | Case No. | Name of the Station | P.F.No. | Vehicle No. |
|---|---|---|---|---|
| 1. | Cr.Mis.76/09 | Malebennur PS | 47/05 | KA-17-E-7697 |

Hence, it is notified to the public that if anybody is owner of the above property may claim its ownership and shall appear before the Prl.Civil Judge (Jr.Dn.) & JMFC, Harihar and shall prove the ownership within two months from this day of notification. Otherwise, the vehicle will be sold in public auction before this Court within 6 months of this Court Order i.e., 28.04.2009.

Given under my hand and seal of this Court Dated 28th day of April, 2009.

Prl.Civil Judge (Jr.Dn.) and JMFC, Harihar.

**IN THE COURT OF THE PRL.CIVIL JUDGE (JR.DN.) & JMFC, HARIHAR**

**NOTIFICATION**

It is notified that the following unclaimed property bearing vehicle number in the following case has not been claimed its ownership by anybody.

| Sl. No. | Case No. | Name of the Station | P.F.No. | Vehicle No. |
|---|---|---|---|---|
| 1. | Cr.Mis.101/09 | Harihara Rural PS | 60/03 | Eng.No.96B-19F-02067 |

Hence, it is notified to the public that if anybody is owner of the above property may claim its ownership and shall appear before the Prl.Civil Judge (Jr.Dn.) & JMFC, Harihar and shall prove the ownership within two months from this day of notification. Otherwise, the vehicle will be sold in public auction before this Court within 6 months of this Court Order i.e., 28.04.2009.

Given under my hand and seal of this Court Dated 28th day of April, 2009.

Prl.Civil Judge (Jr.Dn.) and JMFC, Harihar.

**IN THE COURT OF THE PRL.CIVIL JUDGE (JR.DN.) & JMFC, HARIHAR**

**NOTIFICATION**

It is notified that the following unclaimed property bearing vehicle number in the following case has not been claimed its ownership by anybody.

| Sl. No. | Case No. | Name of the Station | P.F.No. | Vehicle No. |
|---|---|---|---|---|
| 1. | Cr.Mis.100/09 | Harihara Rural PS | 59/03 | KA-34-J-5393 |

Hence, it is notified to the public that if anybody is owner of the above property may claim its ownership and shall appear before the Prl.Civil Judge (Jr.Dn.) & JMFC, Harihar and shall prove the ownership within two months from this day of notification. Otherwise, the vehicle will be sold in public auction before this Court within 6 months of this Court Order i.e., 28.04.2009.

Given under my hand and seal of this Court Dated 28th day of April, 2009.

PR-394 Prl.Civil Judge (Jr.Dn.) and JMFC, Harihar.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED-TAX ACT, 2003**

**Sub:** KVAT Act, 2003- Clarification under Section 59(4) regarding the rate of tax applicable on certain goods for use by persons who are physically disabled, temporarily or permanently-reg,

**Ref:** Application Dated:31.05.2008 of Sri Hemanth Kumar, Partner, M/s Future Medicare, No.2/1, 1st Floor, Shakti Complex, Nagappa Street, Seshadripuram, Bangalore-20.

In his application cited above, Sri Hemanth Kumar, Partner, M/s Future Medicare, No.2/1, 1st Floor, Shakti Complex, Nagappa Street, Seshadripuram, Bangalore-20, has sought clarification regarding the rate of tax applicable on certain goods for use by persons who are physically disabled, temporarily or permanently.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.53/08-09, Dated:16th April, 2009**

It is hereby clarified that the rates of tax applicable on the following goods are as indicated:

| Sl. No. | Goods | Rate of tax/ Section |
|---|---|---|
| 1. | Cervical collar, shoulder and arm immobilizer, wrist and forearm splint, rib belt, lumbo sacral belt, abdominal belt, knee immobilizer, emergency splint, ankle-foot splint and traction kit | 4% under entry Sl.No.60 of III Schedule to the KVAT Act, 2003. |
| 2. | Quadrupad-walking aid | Exempt from VAT under entry 2 of the 1 Schedule to the KVAT Act, 2003. |

**B.A. HARISH GOWDA**

PR-396 Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED-TAX ACT, 2003**

**Sub:** KVAT Act, 2003- Clarification under Section 59(4) regarding the rate of tax applicable on 'spindles or rollers'.

**Ref:** Application Dated:03.12.2008 of Sri B.P. Parmoji, Partner, M/s Master Precision, Sy.No.7/2, Gajanan Nagar, Behind KEB Sub-Station, Udyambag, Belgaum-590 008.

In his application cited above, Sri B.P. Parmoji, Partner, M/s Master Precision, Sy.No.7/2, Gajanan Nagar, Behind KEB Sub-Station, Udyambag, Belgaum-590 008, has sought clarification regarding the rate of tax applicable on 'spindles or rollers'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.222/08-09, Dated:16th April, 2009**

It is hereby clarified that 'spindles' or 'rollers' are taxable at 12.5% under Section 4(1) (b) of the Karnataka Value Added Tax Act, 2003.

**B.A. HARISH GOWDA**
Commissioner of Commercial Taxes,
(Karnataka), Bangalore.

PR-397

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED-TAX ACT, 2003**

**Sub:** KVAT Act, 2003- Clarification under Section 59(4) regarding the rate of tax applicable on 'maize flakes'.

**Ref:** Application Dated:06.01.2009 of M/s Karnataka State Agro Corn Products Limited, P.B. No.2479, Bellary Road, Hebbal, Bangalore-560 024.

In its application cited above, M/s Karnataka State Agro Corn Products Limited, P.B. No.2479, Bellary Road, Hebbal, Bangalore-560 024, has sought clarification regarding the rate of tax applicable on 'maize flakes'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No.CLR.CR.246/08-09, Dated:16th April, 2009**

It is hereby clarified that the rates of tax applicable on the following goods are as indicated under.

| Sl. No. | Commodity | Rate of tax/ Section |
|---|---|---|
| 1. | Poha of maize or flattened maize | 4% under entry 38 of the III Schedule to the KVAT Act, 2003. |
| 2. | Ready to eat corn flakes | 12.5% under Section 4(1)(b) of the KVAT Act, 2003. |

**B.A. HARISH GOWDA**
Commissioner of Commercial Taxes,
(Karnataka), Bangalore.

PR-398

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ: ಪಿಜಿಎ/ಎಸ್.ಆರ್–64/2007–08**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಉಷಾ ರಾಣಿ ಕೋಂ ಲೇಟ್ ಡಿ. ಸುಬ್ರಹ್ಮಣಿ<br>2) ಕು: ಎಸ್. ಅನಿತ, ತಂದೆ: ಲೇಟ್ ಡಿ. ಸುಬ್ರಹ್ಮಣಿ.<br>3) ಶ್ರೀ ಎಸ್. ದಿನೇಶ್ ಬಿನ್ ಲೇಟ್ ಡಿ. ಸುಬ್ರಹ್ಮಣಿ ನಂ.2/13, 6ನೇ ಎ ಕ್ರಾಸ್, ಮಾಗಡಿ ರಸ್ತೆಯ ಬಲಭಾಗ, ಬೆಂಗಳೂರು–23. | ವಿರುದ್ಧ | ಮುಖ್ಯ ಸಂಚಾರಿ ವ್ಯವಸ್ಥಾಪಕರು ಬಿ.ಎಂ.ಟಿ.ಸಿ.<br>ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–560 027. |

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:23.10.2008ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅರ್ಜಿಯಲ್ಲಿ ಅವರ ಪತಿ ಲೇಟ್ ಡಿ. ಸುಬ್ರಹ್ಮಣಿ, ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 30 ವರ್ಷಗಳ ಸೇವೆಯ ನಂತರ ದಿನಾಂಕ:31.07.2002 ರಂದು ನಿವೃತ್ತಿ ಹೊಂದಿದ್ದು, ತದನಂತರ ದಿನಾಂಕ:23.08.2008 ರಂದು ಮರಣಹೊಂದಿದ್ದಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಹೆಚ್. ಉಮೇಶ**

ಪಿ.ಆರ್.389 ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ನಿಯಂತ್ರಣಾಧಿಕಾರಿಗಳು,
ಉಪಧನ ಪಾವತಿ ಕಾಯ್ದೆ, ವಿಭಾಗ–4, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಡುಪಿ ಜಿಲ್ಲೆ, ಉಡುಪಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ/ಸಿಆರ್.–05/ಎಫ್.ಸಿ./2009, ದಿನಾಂಕ:21ನೇ ಏಪ್ರಿಲ್, 2009**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| ಶ್ರೀಮತಿ ಕೌಸಲ್ಯ ದೇವಿ, W/o ದಿ॥ ರಾಮ್‌ಜನಮ್ ಪಾಸ್ವಾನ್, ಬ್ರಾಹಿ ಬೀಗಾ (VIII), ಚಕಂದ್ ಸ್ಟೇಷನ್ ಅಂಚೆ, ಗಯಾ ಜಿಲ್ಲೆ, ಬಿಹಾರ್ ರಾಜ್ಯ–804404. | ವಿರುದ್ಧ | ಮೆ: ಪವರ್ ಮೆಕ್ ಪ್ರಾಜೆಕ್ಟ್ ಲಿ., 2ನೇ ಮಹಡಿ, ಲೋಹಿ ಟವರ್ಸ್, ನಿರ್ಮಲ್ ಕಾನ್ವೆಂಟ್ ರಸ್ತೆ, ಪಟ್ಟಮಟ್ಟ, ವಿಜಯವಾಡ–520010, ಆಂಧ್ರಪ್ರದೇಶ, ಭಾರತ. |

**ಅಧಿಸೂಚನೆ**

ಅರ್ಜಿದಾರರಾದ ಕೌಸಲ್ಯ ದೇವಿ ಇವರು ತಮ್ಮ ಪತಿಯಾದ ರಾಮ್‌ಜನಮ್ ಪಾಸ್ವಾನ್ ಇವರು ಮೆ: ಪವರ್ ಮೆಕ್ ಪ್ರಾಜೆಕ್ಟ್ ಲಿ., ಪಡುಬಿದ್ರಿ ಶಾಖೆ, ಪಡುಬಿದ್ರಿ, ಉಡುಪಿ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ ದಿನಾಂಕ:04.10.2008ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿವಸಗಳ ಒಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮ್ ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**

ಪಿ.ಆರ್.383 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಡುಪಿ ಜಿಲ್ಲೆ, ಉಡುಪಿ.

**OFFICE OF THE COMMISSIONER, BANGALORE DEVELOPMENT AUTHORITY, BANGALORE**
**NOTIFICATION UNDER SECTION 17(1) AND (3) OF BDA ACT 1976**
**No:BDA/Commr/LAO/25/09-10, Bangalore, Dated:4th April, 2009**

Where as it appears to the Bangalore Development Authority, that the lands specified in the schedule hereto likely to be needed for the public purpose i.e., for formation of "Outer Ring Road between Mysore Road and Magadi Road" in this regard development scheme has been prepared.

Notices to that effect is hereby given to all whom it may concern in accordance with the provisions of Sub-Section (1) and (3) of section 17 of the BDA Act 1976, (Karnataka Act No.12 of 1976). In accordance with section 36 of BDA Act, the Land Acquisition Officer, Bangalore Development Authority, Bangalore, his staff and workmen are hereby authorized to exercise the power conferred under section– 4(2) of L.A. Act 1894. Any person interested in the land may prefer his objections within 30 days from the date of Publication of this notification to land Acquisition Officer, Bangalore Development Authority.

All Persons interested in the said land are hereby warned not to abstract or interfere with any surveyor or other persons employed upon the said lands for the purpose of the said acquisition, any contracts for the disposal of the said lands by sale, lease, mortgage, assignment exchange or otherwise or any other outlay of or improvements made therein without the sanction of the Deputy Commissioner, (Land Acquisition), Bangalore Development Authority, Bangalore, after the date of Publication at this notification will under section 24 (Clause Seventhly) of the Land Acquisition Act 1894, be disregarded by the officer, assessing compensation for such parts of the lands as may be finally acquired.

The Particulars of the Scheme, the map of the area, comprised therein and the statement specifying the lands which it is proposed to acquire may be seen in the office of the Land Acquisition Officer, Bangalore Development Authority, Bangalore during the office hours on all working days.

**District:Bangalore** **Taluk:Bangalore North & South** **Hobli: Kengeri** **Village:Nayandahally, Sreegandadakaval**

| Sl. No. | Name of the Khatedar and Annubhavadars | Sy No. | Whether Dry/Wet/ Garden | Total Extent A-G | Kharab Land A-G | Remaining Extent A-G | Assessment Rs. Ps. | Extent Now Required | Boundaries | | | |
|---|---|---|---|---|---|---|---|---|---|---|---|---|
| | | | | | | | | | East sy no | West Sy no | North Sy no | South |
| **Nayandahally** | | | | | | | | | | | | |
| 1 | Government | 59/1 | Dry | 0-36 | - | 0-36 | 1-14 | 0-15 | Sy no.55 | Remaining Portion of Sy no 59/1 | 60 | Remaining portion of sy no 59/1 |
| **Sreegandadakaval** | | | | | | | | | | | | |
| 1 | G.M.Seenal S/o.Modi Ram (0-22) Government (0-11) | 57/7 | Dry | 0-33 | - | 0-33 | 0-44 | 0-20 | Sy no.57/7 & Nala | Sy no.57/7 Already notified | Magadi Road | Sajjepalya Boundary |
| | | | | | | | **Total extent** | **0.35** | | | | |

Commissioner
Bangalore Development Authority, Bangalore

PD-17

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ ಕೋಲಾರ.**

**ವಿಷಯ:** ಬೈರವೇಶ್ವರ ಹರಿಜನ/ಗಿರಿಜನ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಹುಣಸಿಕೋಟೆ, ಮಾಲೂರು ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶದ ಸಂಖ್ಯೆ:ಡಿಆರ್‌ಕೆ/ಎಲ್ ಕ್ಯೂಡಿ/ಸಿಆರ್ 9/2007–08 ದಿನಾಂಕ:21.2.2008.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್. 49/ಸಮಾಪನೆ/ಸಿಆರ್. 3/2008–09 ದಿನಾಂಕ:13.6.2008.

**ಪೀಠಿಕೆ:**

ಬೈರವೇಶ್ವರ ಹರಿಜನ/ಗಿರಿಜನ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಹುಣಸಿಕೋಟೆ, ಮಾಲೂರು ತಾಲ್ಲೂಕು ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಮಾಲೂರು ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಸಂಘದ ನೋಂದಣಿಯನ್ನು ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ ಕೋಲಾರ ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಸಂಘವು ಸರ್ಕಾರದಿಂದ ಯಾವುದೇ ರೀತಿಯ ಧನ ಸಹಾಯವನ್ನು ಪಡೆದಿರುವುದಿಲ್ಲ ಡಿಸಿಸಿ ಬ್ಯಾಂಕ್ ನಿ., ಮಾಲೂರು ಶಾಖೆ ಈ ಬ್ಯಾಂಕ್ ನಲ್ಲಿ ಸಂಘದ ಖಾತೆ ಹೊಂದಿರುವುದಿಲ್ಲ.

ದಿನಾಂಕ:11–6–2008 ರಂದು ನಡೆದ ಸಭೆಯಲ್ಲಿ ಈ ಸಂಘದ ಮುಂದುವರೆಕೆಯಿಂದ ಸದಸ್ಯರಿಗಾಗಲಿ ಮತ್ತು ಸರ್ಕಾರಕ್ಕಾಗಲಿ ಉಪಯೋಗ ಇಲ್ಲದ ಕಾರಣ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿರುತ್ತಾರೆ. ಮತ್ತು ಶೂನ್ಯ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ.

ಈ ರೀತಿಯಾಗಿ ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು. ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ನಂ.ಡಿಆರ್ ಕೆ/ಎಲ್ ಕ್ಯೂಡಿ/ಸಿಆರ್ 9/2007–08, ದಿನಾಂಕ:13ನೇ ಜೂನ್ 2008**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ ಎಂ/2001 ದಿನಾಂಕ:21.11.2001 ರ ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು ಕೋಲಾರ ಜಿಲ್ಲೆ, ಕೋಲಾರ ಆದ ನಾನು ಬೈರವೇಶ್ವರ ಹರಿಜನ/ಗಿರಿಜನ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ಹುಣಸಿಕೋಟೆ ಮಾಲೂರು ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ:ಎಆರ್ 49/ಯೋಜನೆ/ಸಿಆರ್ 298 ನೋಂದಣಿ 2875/2000–01 ದಿನಾಂಕ:11.3.2000 ಅನ್ನು ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:13.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 893

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ ಕೋಲಾರ**

**ಕ್ರ.ಸಂ.:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 14/2007–08 ದಿನಾಂಕ: 9ನೇ ಜೂನ್ 2008**

**ವಿಷಯ:** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಭಾರತ್ ಬಳಕೆದಾರರ ಸಹಕಾರ ಸಂಘ ನಿ., ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್ 49/ಸಮಾಪನೆ/ಸಿಆರ್ 23/2008–09 ದಿನಾಂಕ:16.2.2006 ಮತ್ತು 28.5.2006.

**ಪ್ರಸ್ತಾವನೆ:**

ಭಾರತ್ ಬಳಕೆದಾರರ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್ ಕೆ/ಯೋಜನೆ/ಸಿಆರ್.86/ರಿಜಿಸ್ಟ್ರೇಷನ್/15473/87–88 ದಿನಾಂಕ:11–12–1987 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು ಕೆಜಿಎಫ್ ಪ್ರದೇಶದ ಇಂದಿರಾನಗರ, ಮಾದಯ್ಯ ಲೇಔಟ್, ಸ್ವರ್ಣನಗರ ಇವುಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಸಂಘವು ಸುಮಾರು 9 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಲೆಕ್ಕಪರಿಶೋಧನೆಯು 94–95 ನೇ ಸಾಲುಗಳಿಂದ ಬಾಕಿ ಇರುತ್ತದೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ಕಲಂಗಳ ರೀತ್ಯಾ ಸಂಘವು ಪ್ರತಿಮಾಹೆ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆಸಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ರೂ. 121–00 ಗಳನ್ನು ಹೊಂದಿರುತ್ತದೆ. ಸದರಿ ಸಂಘಕ್ಕೆ ಸರ್ಕಾರದಿಂದ ಯಾವುದೇ ರೀತಿಯ ಆರ್ಥಿಕ ಸೌಲಭ್ಯವು ಮಂಜೂರಾಗಿಲ್ಲ. 94–95 ನೇ ಸಾಲಿನ ಆಸ್ತಿ–ಜವಾಬ್ದಾರಿ ತಃಖ್ತೆಯಂತೆ ರೂ. 12496–00 ಗಳಷ್ಟು ನಿವ್ವಳ ನಷ್ಠ ಹೊಂದಿದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಭಾರತ್ ಬಳಕೆದಾರರ ಸಹಕಾರ ಸಂಘ ನಿ., ಕೆಜಿಎಫ್., ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:9.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

ಪಿ.ಆರ್. 890

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಕ್ರ.ಸಂ.:ಡಿಆರ್‌ಬಿ/ಆರ್/ಸಿಬ್ಬಂದಿ/16/2008–09, ದಿನಾಂಕ: 21ನೇ ಮೇ 2008**

**ವಿಷಯ :** ಶ್ರೀ ವಿ. ಶ್ರೀನಿವಾಸಮೂರ್ತಿ, ಡಿ. ದರ್ಜೆ ನೌಕರರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳನ್ವಯ ಶಿಸ್ತು ಕ್ರಮ–ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ :**
1. ಈ ಕಛೇರಿಯ ಸಮಸಂಖ್ಯೆ ದಿ:1.6.2006 ಮತ್ತು 22.6.2006ರಂದು ನೌಕರರಿಗೆ ನೀಡಿರುವ ನೋಟೀಸುಗಳು.
2. ಈ ಕಛೇರಿಯ ಸಮಸಂಖ್ಯೆಯ ದಿ:1–9–2006ರ ಆದೇಶ ಸದರಿ ನೌಕರರ ಶಿಸ್ತು ವಿಚಾರಣೆಗೆ ಆದೇಶಿಸಿರುವುದು.
3. ಈ ಕಛೇರಿಯ ಆದೇಶ ಸಂ:ಡಿಆರ್ ಬಿ:ಆರ್.ಸಿಬ್ಬಂದಿ:02 2006–07 ದಿ:1–8–2006 ನೌಕರರನ್ನು ಅಮಾನತ್ತಿನಲ್ಲಿರಿಸಿರುವುದು.
4 ಈ ಕಛೇರಿಯ ಆದೇಶ ಸಂ. ಡಿಆರ್ ಬಿ:ಆರ್. ಸಿಬ್ಬಂದಿ 02: 2006–07 ದಿ:6–11–2006– ನೌಕರರನ್ನು ಸೇವೆಗೆ ಪುನಃಸ್ಥಿತಿಗೊಳಿಸಿರುವುದು)

5 ಈ ಕಛೇರಿಯ ಕಾರಣ ಕೇಳುವ 2ನೇ ನೋಟೀಸು ಸಂ. ಡಿಆರ್‌ಬಿ:ಆರ್ ಸಿಬ್ಬಂದಿ:2:2006–07 ದಿ:20–3–2007–ನೌಕರರಿಗೆ ಜಾರಿಗೊಳಿಸಿರುವುದು.

**ಪ್ರಸ್ತಾವನೆ:**

ಶ್ರೀ ವಿ. ಶ್ರೀನಿವಾಸಮೂರ್ತಿ ಡಿ ದರ್ಜೆ ನೌಕರರು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇವರು ತಮ್ಮ ಮೇಲಾಧಿಕಾರಿಗಳಿಗೆ ಯಾವ ಮುನ್ಸೂಚನೆಯನ್ನು ನೀಡದೇ ಅಥವಾ ಸಕ್ಷಮ ಪ್ರಾಧಿಕಾರದಿಂದ ನಿಯಮಗಳನುಸಾರ ರಜೆ ಮಂಜೂರಾತಿ ಪಡೆಯದೆ ದಿ:1.3.2006 ರಿಂದ 120 ದಿನಗಳಿಗೂ ಮೀರಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಉಳಿದ ದುರ್ನಡತೆಗೆ 1958ರ ಕರ್ನಾಟಕ ನಾಗರೀಕ ಸೇವಾ ನಿಯಮ 108ರಡಿ ಇವರ ಸೇವೆಯನ್ನು ವಜಾಗೊಳಿಸುವ ಸಲುವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರನ್ವಯ ನಿಗಧಿಪಡಿಸಿದ ಕ್ರಮಗಳನ್ನು ಅನುಸರಿಸಲು ಅನುಬಂಧ 1 ರಿಂದ 4 ರವರೆಗಿನ ಆರೋಪ ಪಟ್ಟಿಯನ್ನು ಉಲ್ಲೇಖ (1) ರನ್ವಯ ದಿ:22–6–2006 ರ ತಿಳುವಳಿಕೆ ಪತ್ರದೊಂದಿಗೆ ಜಾರಿ ಮಾಡಿ ನಂತರ ಉಲ್ಲೇಖ (3)ರ ಆದೇಶದನ್ವಯ ಇವರ ಸೇವೆಯನ್ನು ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿತ್ತು.

ಈ ಪ್ರಾಧಿಕಾರದ ದಿ:22.6.2006 ರ ತಿಳುವಳಿಕೆ ಪತ್ರಕ್ಕೆ ಆರೋಪಿ ಸರ್ಕಾರಿ ನೌಕರರಿಂದ, ಸೂಚಿತ ಕಾಲಾವಧಿಯೊಳಗೆ ಲಿಖಿತ ವಿವರಣೆ ಬಾರದೆ ಕಾರಣ ಇವರ ಅನಧಿಕೃತ ಗೈರು ಹಾಜರಿಗೆ ಕಾರಣ ತಿಳಿಯಲು ಮತ್ತು ಇವರನ್ನು ಪ್ರತಿ ರಕ್ಷಿಸಿಕೊಳ್ಳಲು ಮುಕ್ತ ಅವಕಾಶ ನೀಡುವ ಸಲುವಾಗಿ ವಿಚಾರಣಾ ನಡೆಸುವುದು ಅವಶ್ಯಕವೆಂದು ಮನಗಂಡು ಶಿಸ್ತು ಪ್ರಾಧಿಕಾರದ ಪರವಾಗಿ ವಿಚಾರಣೆ ನಡೆಸುವುದಕ್ಕೆ ವಿಚಾರಣಾಧಿಕಾರಿಯನ್ನು ಮತ್ತು ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲೆಗಳನ್ನು ವಿಚಾರಣೆಗೆ ಮಂಡಿಸುವುದಕ್ಕೆ ಮಂಡನಾಧಿಕಾರಿಯನ್ನು ನೇಮಿಸಿ ಉಲ್ಲೇಖ (2) ರಂತೆ ಆದೇಶಿಸಲಾಗಿತ್ತು.

ವಿಚಾರಣಾ ಪ್ರಾಧಿಕಾರವು ಆರೋಪಿ ಸರ್ಕಾರಿ ನೌಕರರಿಗೆ ವಿಚಾರಣಾ ನಡವಳಿಗಳಲ್ಲಿ ಸಾಕಷ್ಟು ಕಾಲಾವಕಾಶ ನೀಡಿರುತ್ತದೆ. ಆರೋಪಿ ನೌಕರರು ವಿಚಾರಣಾ ಪ್ರಾಧಿಕಾರದ ಮುಂದೆ ಹಾಜರಾಗಿ ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಇವರು ತಮ್ಮ ಹೇಳಿಕೆಯಲ್ಲಿ ದಿ:1–3–2006 ರಿಂದ 31–7–2006ರವರೆಗೆ ಕಛೇರಿಯ ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ಒಪ್ಪಿಕೊಂಡು ವೈದ್ಯಕೀಯ ರಜೆ ಕೋರಿ ಅರ್ಜಿ ಸಲ್ಲಿಸಲು ಅನಾರೋಗ್ಯದ ನಿಮಿತ್ತ ಸಾಧ್ಯವಾಗಲಿಲ್ಲವೆಂಬ ಕಾರಣಗಳನ್ನು ತಿಳಿಸಿದ್ದಾರೆ. ಆದರೆ ಈ ಅವಧಿಯಲ್ಲಿ ಇವರು ಅನಾರೋಗ್ಯದಿಂದ ಬಳಲುತ್ತಿರುವ ವಿಷಯವನ್ನು ತಮ್ಮ ಮೇಲಾಧಿಕಾರಿಗಳಿಗೆ ಯಾವುದೇ ಸಂಪರ್ಕ ಸಾಧನದ ಮೂಲಕ ತಿಳಿಸಲು ಸಾಧ್ಯವಾಗಲಿಲ್ಲ ಎಂಬುದನ್ನು ಸಮರ್ಥಿಸಿಕೊಳ್ಳಲು ವಿಫಲರಾಗಿರುವುದು ವಿಚಾರಣಾ ವರದಿಯಿಂದ ಸ್ಪಷ್ಟವಾಗಿದೆ. ಇದರಿಂದಾಗಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಶಿಸ್ತು ಪ್ರಾಧಿಕಾರವು ಒಪ್ಪಿಕೊಂಡಿರುತ್ತದೆ.

ಶಿಸ್ತು ವಿಚಾರಣೆಯಿಂದಾಗಿ ವಿಚಾರಣಾ ವರದಿಯು ಬಂದ ನಂತರ ಆರೋಪಿ ನೌಕರರಿಗೆ ನಿಯಮಗಳನುಸಾರ ಎರಡನೇ ನೋಟೀಸು ನೀಡಲಾಗಿ ಅದಕ್ಕೂ ಅವರು ಯಾವುದೇ ಸಮಜಾಯಿಷಿ ನೀಡಿರುವುದಿಲ್ಲ ಮತ್ತು ಅವರ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿ ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುವುದಿಲ್ಲ ಇದರಿಂದಾಗಿ ಸದರಿ ನೌಕರರು ಕಛೇರಿಯ ಕರ್ತವ್ಯಕ್ಕೆ ಹಾಜರಾಗುವ ಬಗ್ಗೆ ಯಾವುದೇ ಆಸಕ್ತಿ ಹೊಂದದಿರುವುದು ದೃಢಪಟ್ಟಿರುತ್ತದೆ ಈ ನೌಕರರು ದಿ:1–3–2006 ರಿಂದ ಪ್ರಾರಂಭಗೊಂಡು ತಹಲ್ ವರೆಗೆ ಕಛೇರಿಯ ಕರ್ತವ್ಯಕ್ಕೆ ಗೈರು ಹಾಜರಾಗಿ ಉಳಿದಿರುತ್ತಾರೆ.

ಈ ನೌಕರರ ಹಿಂದಿನ ಸೇವಾ ವಿವರಗಳನ್ನು ಪರಿಶೀಲಿಸಲಾಗಿದೆ. ಇವರು ಆಗಿಂದಾಗ್ಗೆ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಉಳಿದಿರುವುದನ್ನು ರೂಢಿ ಮಾಡಿಕೊಂಡಿರುವುದು ಈ ಕೆಳಗೆ ಉಲ್ಲೇಖಿಸಿರುವ ಕೆಲವು ಸಂದರ್ಭಗಳಲ್ಲಿ ವ್ಯಕ್ತವಾಗುತ್ತದೆ.

1 ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂ.ಸಿಬ್ಬಂದಿ/66/ಇಸಿಸಿ/2001–2002 ದಿ:20–3–2004 ರಲ್ಲಿ ಈ ನೌಕರರ ಅನಧಿಕೃತ ಗೈರು ಹಾಜರಿಯ ಆರೋಪದ ಮೇರೆಗೆ ಇವರನ್ನು ಶಿಸ್ತು ಕ್ರಮ ಬಾಕಿ ಇಟ್ಟು ಅಮಾನತ್ತಿನಲ್ಲಿಟ್ಟು ನಂತರ ಜರುಗಿಸಿದ ಶಿಸ್ತು ವಿವರಣೆಯಲ್ಲಿ ಇವರಿಗೆ ದಿ:2–6–2005 ರಂದು ವಾಗ್ದಾಂಡನೆಯನ್ನು ವಿಧಿಸಿ, ಇನ್ನು ಮುಂದೆ ಕಛೇರಿ ಕೆಲಸಕ್ಕೆ ಯಾವುದೇ ಸಂದರ್ಭದಲ್ಲಿ ಅನಧಿಕೃತವಾಗಿ ಗೈರು ಹಾಜರಾಗದಂತೆ ಅಂತಿಮವಾಗಿ ಎಚ್ಚರಿಕೆ ನೀಡಿರುತ್ತಾರೆ.

2 ನೌಕರರು, ಈ ಹಿಂದೆ ಈ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ದಿ:2–5–2005 ರಿಂದ 23–11–2005ರ ಅವಧಿಯಲ್ಲಿ ಒಟ್ಟು 35 ದಿನಗಳು ಅನಧಿಕೃತ ಗೈರುಹಾಜರಾಗಿ ಉಳಿದಿದ್ದರೂ ಕೂಡ ಮಾನವೀಯತೆ ದೃಷ್ಟಿಯಿಂದ ಈ ಅವಧಿಗೆ ರಜಾ ಮಂಜೂರು ಮಾಡಲಾಗಿತ್ತು.

3 ಪ್ರಸ್ತುತ ಈ ನೌಕರರು ಈ ಕಛೇರಿಯ ಕರ್ತವ್ಯಕ್ಕೆ ದಿ:1–3–2006 ರಿಂದ ಅನಧಿಕೃತ ಗೈರು ಹಾಜರಾಗಿ ಉಳಿದಿರುವುದರಿಂದ ಈ ಕಛೇರಿಯ ಆದೇಶ ಸಂ:ಡಿಆರ್‌ಬಿಆರ್:ಸಿಬ್ಬಂದಿ:2:06–07 ದಿ:1–8–2006 ರನ್ವಯ ನೌಕರರನ್ನು ಅಮಾನತ್ತಿನಲ್ಲಿರಿಸಲಾಗಿದೆ. ಅವರು ಕರ್ತವ್ಯಕ್ಕೆ ಹಾಜರಾಗುವ ಬಗ್ಗೆ ಈ ಪ್ರಾಧಿಕಾರಕ್ಕೆ ಯಾವುದೇ ಮನವಿ ಸಲ್ಲಿಸಿರುವುದಿಲ್ಲ ಇದರಿಂದಾಗಿ ಇವರು ಸೇವೆಯಲ್ಲಿ ಮುಂದುವರೆಯುವ ಯಾವುದೇ ಆಸಕ್ತಿ ಹೊಂದಿಲ್ಲದಿರುವುದು ಸ್ಪಷ್ಟವಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 108ರ ಪ್ರಕಾರ 4 ತಿಂಗಳು ಅಥವಾ ಹೆಚ್ಚಿನ ಅವಧಿಗೆ ಕರ್ತವ್ಯಕ್ಕೆ ವಿಮುಖವಾಗಿ ಗೈರು ಹಾಜರಾಗುವ ಅಧಿಕಾರಿ/ನೌಕರರು ಸೇವೆಯಿಂದ ವಜಾ ಅಥವಾ ತೆಗೆದು ಹಾಕುವ ಗುರಿಗೆ ಒಳಗಾಗುತ್ತಾರೆ. ಪ್ರಸ್ತುತ ಪ್ರಕರಣದಲ್ಲಿ ಶ್ರೀ ವಿ. ಶ್ರೀನಿವಾಸಮೂರ್ತಿ ಇವರು 4 ತಿಂಗಳಿಗೂ ಮೀರಿ ಅನಧಿಕೃತವಾಗಿ ಗೈರು ಹಾಜರಾಗಿ ಉಳಿದಿರುವುದರಿಂದ ಇವರು ಈ ದಂಡನೆಗೆ ಹೊರತಾಗಿಲ್ಲ ಈ ಮೇಲ್ಕಂಡ ಎಲ್ಲಾ ಅಂಶಗಳಿಂದಾಗಿ ಪ್ರಕರಣದ ದಾಖಲೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಕೆಳಕಂಡ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಸರ್ಕಾರದ ಆದೇಶ ಕ್ರಮಾಂಕ:ಡಿಪಿಎಆರ್/7/ಎಸ್ ಡಿಇ/2005. ದಿ:1-8-2005 ರನ್ವಯ ಪ್ರದತ್ತವಾಗಿರುವ ಅಧಿಕಾರದಂತೆ ಬಿ.ಎಸ್. ಹರೀಶ್, ಕೆ.ಸಿ.ಎಸ್., ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಆದ ನಾನು ಶ್ರೀ ವಿ. ಶ್ರೀನಿವಾಸಮೂರ್ತಿ, ಗ್ರೂಪ್ ಡಿ ನೌಕರರು, ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(VIII) ರನ್ವಯ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 596 ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

## ಕ್ರ.ಸಂ.:ಡಿಆರ್‌ಕೆ/ಎಲ್ ಕ್ಯೂಡಿ/ಸಿಆರ್ 12/2007-08, ದಿನಾಂಕ: 9ನೇ ಜೂನ್ 2008

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿ., ಸ್ವರ್ಣಕುಪ್ಪಂ ಬಡಾವಣೆ, ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ: ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್. 49/ಎಲ್ ಕ್ಯೂಡಿ/ಸಿಆರ್ 27/2008-09 ದಿನಾಂಕ:15-2-2008 ಮತ್ತು 2-5-2006.

**ಪ್ರಸ್ತಾವನೆ:**

ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿ., ಸ್ವರ್ಣಕುಪ್ಪಂ ಬಡಾವಣೆ, ಕೆಜಿಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್ ಕೆ/ಯೋಜನೆ/ಸಿಆರ್ 110/ರಿಜಿಸ್ಟ್ರೇಷನ್/16273/88-89 ದಿನಾಂಕ:5-8-1988 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು ಬಿ.ಇ.ಎಂ.ಎಲ್. ನಗರಕ್ಕೆ ಮಾತ್ರ ಸೀಮಿತವಾಗಿರುತ್ತದೆ .ಈ ಸಂಘವು 96-97ನೇ ಸಾಲಿನಿಂದ ಕಾರ್ಯನಿರ್ವಹಿಸದೆ ಸಂಪೂರ್ಣ ಸ್ಥಗಿತಗೊಂಡಿರುತ್ತದೆ. 8 ವರ್ಷಗಳಿಂದ ಸಂಘದ ಲೆಕ್ಕಪರಿಶೋಧನೆಯಾಗಿರುವುದಿಲ್ಲ. ಸಂಘಕ್ಕೆ ಸರ್ಕಾರದಿಂದ ಬಡ್ಡಿ ರಹಿತ ಸಾಲ ರೂ. 37500-00 ಮತ್ತು ಸಹಾಯಧನ 12500-00 ರೂ.ಗಳು ಮಂಜೂರಾಗಿರುತ್ತದೆ. 37162-72 ರೂಗಳಷ್ಟು ನಿವ್ವಳ ನಷ್ಟ ಹೊಂದಿರುತ್ತದೆ. ಈ ಸಂಘವು ಸಂಘದ ಬೈಲಾ ಮತ್ತು ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ದಿನಾಂಕ:10-2-2006ಕ್ಕೆ ರೂ. 115-00 ಗಳನ್ನು ಹೊಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21-11-2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಮಂಜುನಾಥ ಬಳಕೆದಾರರ ಸಹಕಾರ ಸಂಘ ನಿ., ಸ್ವರ್ಣಕುಪ್ಪಂ ಬಡಾವಣೆ, ಕೆಜಿಎಫ್, ಬಂಗಾರಪೇಟೆ

ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:9-6-2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಕ್ರ.ಸಂ.:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 12/2007-08, ದಿನಾಂಕ: 9ನೇ ಜೂನ್ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಅಂಬೇಡ್ಕರ್ ರಸ್ತೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್. 49/ಎಲ್‌ಕ್ಯೂಡಿ/ಸಿಆರ್ 32/2005-06 ದಿನಾಂಕ:18-2-2008 ಮತ್ತು 30-5-2006.

**ಪ್ರಸ್ತಾವನೆ:**

ಅಂಬೇಡ್ಕರ್ ರಸ್ತೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ:ಎಆರ್‌ಕೆ/ಸಿಆರ್/44/15025/86-87 ದಿನಾಂಕ:13.11.1986ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇರುತ್ತದೆ. ಸಂಘದ ಲೆಕ್ಕಪರಿಶೋಧನೆ ಸಹ ನಡೆದಿರುವುದಿಲ್ಲ. ಸಂಘದ ಆಡಳಿತ ಮಂಡಲಿ ರಚನೆಯಾಗದಂತೆ ಇದ್ದ ಹಿನ್ನಲೆಯಲ್ಲಿ ಸಂಘಕ್ಕೆ 28(ಎ)(5)ರ ರೀತ್ಯಾ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು ಸದರಿ ಆಡಳಿತಾಧಿಕಾರಿಗಳ ಅವಧಿ ಮುಕ್ತಾಯವಾಗಿರುವುದರಿಂದ ಹಾಗೂ ಸಂಘವು ಸ್ಥಗಿತಗೊಂಡಿರುವುದರಿಂದ ಆಡಳಿತ ಮಂಡಳಿ ಪುನರ್ ರಚನೆಯಾಗಿರುವುದಿಲ್ಲ. ಸಂಘಕ್ಕೆ 96-97ನೇ ಸಾಲಿನಲ್ಲಿ ರೂ. 20000-00 ಗಳ ದುಡಿಯುವ ಬಂಡವಾಳ ಸಾಲ ಮಂಜೂರಾಗಿರುತ್ತದೆ. ಸಂಘವು ತನ್ನ ಬೈಲಾ ರೀತ್ಯಾ ಸಂಘದ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆಸಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ದಿನಾಂಕ:10-2-2006 ಕ್ಕೆ ರೂ. 180-25 ಗಳನ್ನು ಹೊಂದಿರುತ್ತದೆ. ಸಂಘವು ನೋಂದಣಿಯಾದ ದಿನದಿಂದ ಲೆಕ್ಕಪರಿಶೋಧನೆ ನಡೆಯದಂತೆ ಇರುವುದರಿಂದ ಆಸ್ತಿ ಮತ್ತು ಜವಾಬ್ದಾರಿ ತಃಖ್ತೆಗಳು ಲಭ್ಯವಿರುವುದಿಲ್ಲ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21-11-2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಅಂಬೇಡ್ಕರ್ ರಸ್ತೆ ಮಹಿಳಾ ವಿವಿಧೋದ್ದೇಶ ಸಹಕಾರ ಸಂಘ ನಿ., ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:10–6–2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 888

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ :** ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ, ದೋಣಿಮಡಗು, ಬಂಗಾರಪೇಟೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1 ಈ ಕಛೇರಿಯ ಆದೇಶದ ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 7/2007–08 ದಿನಾಂಕ:21–2–2008

2 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್ 49/ಸಮಾಪನೆ/ಸಿಆರ್ 2/2008–09 ದಿನಾಂಕ:13.6.2008.

**ಪೀಠಿಕೆ:**

ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ದೋಣಿಮಡಗು, ಬಂಗಾರಪೇಟೆ ತಾಲ್ಲೂಕು ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಸಂಘದ ನೋಂದಣಿಯನ್ನು ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2) ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಸಂಘವು ಸರ್ಕಾರದಿಂದ ಯಾವುದೇ ರೀತಿಯ ಧನ ಸಹಾಯವನ್ನು ಪಡೆದಿರುವುದಿಲ್ಲ.

ಸಮಾಪನಾಧಿಕಾರಿಗಳು ತಮ್ಮ ದಿನಾಂಕ:11–6–2008 ರಂದು ನಡೆದ ಸಭೆಯ ನಡವಳಿಕೆಗಳಲ್ಲಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಬಂಗಾರಪೇಟೆ ಶಾಖೆಯಲ್ಲಿ ಈ ಸಂಘದ ಖಾತೆಯಲ್ಲಿದ್ದ 8–5–00ಗಳನ್ನು ಸಹಕಾರ ಸಂಘಗಳ ಉಪನಿಬಂದಕರು, ಕೋಲಾರ ಇವರ ಪಿ.ಡಿ. ಖಾತೆಗೆ ದಿನಾಂಕ:11–6–2008 ರಂದು ವರ್ಗಾಯಿಸಿ, ಶೂನ್ಯ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ. ದಿನಾಂಕ:31–3–1992 ಕ್ಕೆ ಇದ್ದಂತೆ ಸಂಘದ ಆಸ್ತಿ–ಜವಾಬ್ದಾರಿ ರೀತ್ಯಾ ಸಂಘವು ರೂ. 101123.08ರ ನಿವ್ವಳ ನಷ್ಟವನ್ನು ಹೊಂದಿರುತ್ತದೆ. ಈ ಸಂಘದ ಮುಂದುವರಿಕೆಯಿಂದ ಸದಸ್ಯರಿಗಾಗಲಿ ಮತ್ತು ಸರ್ಕಾರಕ್ಕಾಗಲಿ ಉಪಯೋಗ ಇಲ್ಲದ ಕಾರಣ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿರುತ್ತಾರೆ.

ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರವನ್ನು ವಹಿಸಿಕೊಳ್ಳಲಾಗಿದೆ.

ಈ ರೀತಿಯಾಗಿ ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಸಲುವಾಗಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

### ನಂ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್ 7/2007–08, ದಿನಾಂಕ:13ನೇ ಜೂನ್ 2008

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ ಎಂ/2001 ದಿನಾಂಕ:21–11–2001ರ ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ದೋಣಿಮಡಗು, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ:ಎಆರ್ 49/ಯೋಜನೆ/ಸಿಆರ್ 41/ನೊಂ. 16918/88–89 ದಿನಾಂಕ:1–2–1989 ಅನ್ನು ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:13–6–2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ವಿಷಯ :** ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ, ಭತ್ತಲಹಳ್ಳಿ ಬಂಗಾರಪೇಟೆ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1 ಈ ಕಛೇರಿಯ ಆದೇಶದ ಸಂಖ್ಯೆ:ಡಿಆರ್‌ಕೆ/ಎಲ್ ಕ್ಯೂಡಿ/ಸಿಆರ್ 8/2007–08 ದಿನಾಂಕ:21–2–2008. ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್ 49/ಸಮಾಪನೆ/ಸಿಆರ್ 1/2008–09 ದಿನಾಂಕ:13.6.2008.

**ಪೀಠಿಕೆ:**

ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಭತ್ತಲಹಳ್ಳಿ, ಬಂಗಾರಪೇಟೆ ತಾಲ್ಲೂಕು ಈ ಸಂಘವು ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದರಿಂದ ಈ ಕಛೇರಿಯ ಉಲ್ಲೇಖ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಬಂಗಾರಪೇಟೆ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಸಂಘದ ಸಮಾಪನಾಧಿಕಾರಿಗಳು ಸಂಘದ ನೋಂದಣಿಯನ್ನು ರದ್ದುಪಡಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರಿಗೆ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರು ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಸಂಘವು ಸರ್ಕಾರದಿಂದ ಯಾವುದೇ ರೀತಿಯ ಧನ ಸಹಾಯವನ್ನು ಪಡೆದಿರುವುದಿಲ್ಲ.

ಸಮಾಪನಾಧಿಕಾರಿಗಳು ತಮ್ಮ ದಿನಾಂಕ:11–6–2008 ರಂದು ನಡೆದ ಸಭೆಯ ನಡವಳಿಕೆಗಳಲ್ಲಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ಬಂಗಾರಪೇಟೆ ಶಾಖೆಯಲ್ಲಿ ಈ ಸಂಘದ ಖಾತೆಯಲ್ಲಿದ್ದ 321–00 ರೂಗಳನ್ನು ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಇವರ ಪಿ.ಡಿ. ಖಾತೆಗೆ ದಿನಾಂಕ:11–6–2008 ರಂದು ವರ್ಗಾಯಿಸಿ, ಶೂನ್ಯ ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಸಲ್ಲಿಸಿರುತ್ತಾರೆ. 94–95ನೇ ಸಾಲಿನ ಆಡಿಟ್ ವರದಿಯನ್ವಯ ಸಂಘವು ರೂ. 152285.49 ಗಳಷ್ಟು ನಿವ್ವಳ ನಷ್ಟವನ್ನು ಹೊಂದಿರುತ್ತದೆ. ಈ ಸಂಘದ ಮುಂದುವರೆಕೆಯಿಂದ ಸದಸ್ಯರಿಗಾಗಲಿ ಮತ್ತು ಸರ್ಕಾರಕ್ಕಾಗಲಿ ಉಪಯೋಗ ಇಲ್ಲದ ಕಾರಣ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿರುತ್ತಾರೆ.

ಸಂಘದ ಯಾವುದೇ ಪುಸ್ತಕಗಳು ಲಭ್ಯವಿಲ್ಲದ ಕಾರಣ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರವನ್ನು ವಹಿಸಿಕೊಳ್ಳಲಾಗಿದೆ.

ಈ ರೀತಿಯಾಗಿ ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಯನ್ನು ವಿಲೇವಾರಿ ಮಾಡಿರುವುದು ಸೂಕ್ತವಾಗಿರುವುದರಿಂದ ಹಾಗೂ ಈ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ತಿಳಿಸಿರುವ ಕಾರಣಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21–11–2001ರ ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ವೃಕ್ಷ ಬೆಳೆಗಾರರ ಸಹಕಾರ ಸಂಘ ನಿ., ಭತ್ತಲಹಳ್ಳಿ, ಬಂಗಾರಪೇಟೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ:ಎಆರ್ 49/ಯೋಜನೆ/ಸಿಆರ್ 49/ನೊಂ. 16919/88–89 ದಿನಾಂಕ:1–12–1989 ಅನ್ನು ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಪಿ.ಆರ್. 889

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

## ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್20/2007–08, ದಿನಾಂಕ:10ನೇ ಜೂನ್ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಗಣೇಶಪುರಂ, ಕೆಜಿಎಫ್,. ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್. 49/ಎಲ್ ಕ್ಯೂಡಿ/ಸಿಆರ್ 28/2005–06–09 ದಿನಾಂಕ:16.2.2005 ಮತ್ತು 29.5.2006.

**ಪ್ರಸ್ತಾವನೆ:**

ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಗಣೇಶಪುರಂ, ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ ಎಆರ್ ಕೆ/ಬಿಸಿಆರ್/300/ರಿಜಿಸ್ಟ್ರೇಷನ್/12456/85-86 ದಿನಾಂಕ:31.10.1985 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು ಕೆಜಿಎಫ್ ಪ್ರದೇಶದ ಗಣೇಶಪುರಂ, ಪಲ್ನರ್ ಗುಡಿಸಿ 2ನೇ ಬ್ಲಾಕ್ 6ನೇ ಕ್ರಾಸ್ ರಾಬರ್ಟ್‌ಸನ್ ಪೇಟೆ, ಕೆಜಿಎಫ್ ರಾಜಪಲ್ಲಿಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಸಂಘದ ಆಡಳಿತ ಮಂಡಳಿ ರಚನೆಯಾಗದಂತೆ ಇದ್ದ ಹಿನ್ನಲೆಯಲ್ಲಿ ಸಂಘಕ್ಕೆ 28(ಎ)(5)ರ ರೀತ್ಯಾ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿದ್ದು ಸದರಿ ಆಡಳಿತಾಧಿಕಾರಿಗಳ ಅವಧಿ ಮುಕ್ತಾಯವಾಗಿರುವುದರಿಂದ ಹಾಗೂ ಸಂಘವು ಸ್ಥಗಿತಗೊಂಡಿರುವುದರಿಂದ ಆಡಳಿತ ಮಂಡಳಿ ಪುನರ್ ರಚನೆಯಾಗಿರುವುದಿಲ್ಲ. ಸಂಘದ ಲೆಕ್ಕಪರಿಶೋಧನೆಯು 96-97 ನೇ ಸಾಲುಗಳಿಂದ ಬಾಕಿ ಇರುತ್ತದೆ. ಸಂಘವು ಬೈಲಾ ರೀತ್ಯಾ ಸಂಘದ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ.

ಸಂಘಕ್ಕೆ ಸರ್ಕಾರದಿಂದ ಹರಿಜನ/ಗಿರಿಜನರನ್ನು ಸದಸ್ಯರಾಗಿ ನೋಂದಾಯಿಸಿಕೊಳ್ಳಲು ರೂ. 731.25 ಗಳಷ್ಟು ಮಂಜೂರಾಗಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋಲಾರ, ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್‌ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಆದ ನಾನು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಗಣೇಶಪುರಂ, ಕೆಜಿಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:10.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್19/2007-08, ದಿನಾಂಕ:10ನೇ ಜೂನ್ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಭಾರತಿನಗರ, ಕೆಜಿಎಫ್,. ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್.49/ಎಲ್‌ಕ್ಯೂಡಿ/ಆರ್ 33/2005-06 ದಿನಾಂಕ:17.2.2006 ಮತ್ತು 30.5.2006.

**ಪ್ರಸ್ತಾವನೆ:**

ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಭಾರತಿನಗರ, ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ ಎಆರ್/49/ಯೋಜನೆ/ಸಿಆರ್ 14/ರಿಜಿಸ್ಟ್ರೇಷನ್/19258/92-93 ದಿನಾಂಕ:25.2.1992 ರಂತೆ ನೋಂದಣಿಯಾಗಿದೆ. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕುಮಟ್ಟಕ್ಕಿಂತ ಕಡಿಮೆ ಇದ್ದು ಕೆಜಿಎಫ್ ಪ್ರದೇಶದ ಭರತ್ ನಗರ, ಹನುಮಂತನಗರ, ಹೆಚ್.ಪಿ. ಸಾಗರ, ಬೈಲಾರ್ ಶಾಪ್ಸ್ ಲೈನ್, ಬೆಟ್ಟನಪುರ, ಪಾಲರ್ ನಗರ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಸಂಘಕ್ಕೆ ಸರ್ಕಾರದಿಂದ 96-97ನೇ ಸಾಲಿನಲ್ಲಿ ರೂ. 20000-00 ಮತ್ತು 2000-01ನೇ ಸಾಲಿನಲ್ಲಿ ರೂ. 1,30,000-00 ಗಳಷ್ಟು ದುಡಿಯುವ ಬಂಡವಾಳ ಸಾಲ ಮಂಜೂರಾಗಿರುತ್ತದೆ., ಸಂಘದ ಲೆಕ್ಕಪರಿಶೋಧನೆಯು 94-95 ನೇ ಸಾಲುಗಳಿಂದ ಬಾಕಿ ಇರುತ್ತದೆ. ಸಂಘದ ಆಡಳಿತ ಮಂಡಳಿ ಸಭೆ ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ.

ಸದರಿ ಸಂಘವು ಡಿಸಿಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಎಸ್.ಬಿ. ಖಾತೆಯನ್ನು ಹೊಂದಿದ್ದು ಸದರಿ ಖಾತೆಯಲ್ಲಿ ದಿನಾಂಕ:10–2–2006ಕ್ಕೆ ರೂ 680–00ಗಳನ್ನು ಹೊಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋಲಾರ, ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಆದ ನಾನು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಭಾರತಿನಗರ, ಕೆಜಿಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಬಂಗಾರಪೇಟೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ:10.6.2008 ರಂದು ನನ್ನ ಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಹೊರಡಿಸಿದೆ.

ಪಿ.ಆರ್. 891

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**
**ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್5/2007–08, ದಿನಾಂಕ:21ನೇ ಫೆಬ್ರವರಿ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಬಿ.ಇ.ಎಂ.ಎಲ್ ಬಳಕೆದಾರರ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ ಕೆ.ಜಿ.ಎಫ್. ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್.49/ಎಲ್‌ಕ್ಯೂಡಿ/ಸಿಆರ್ 25/2005–06 ದಿನಾಂಕ:17.2.2006 ಮತ್ತು 29.5.2006.

**ಪ್ರಸ್ತಾವನೆ:**

ಬಿ.ಇ.ಎಂಎಲ್. ಬಳಕೆದಾರರ ಸಹಕಾರ ಸಂಘ ನಿ., ಬಿ.ಇ.ಎಂ.ಎಲ್. ನಗರ ಕೆಜಿಎಫ್, ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆ ಎಆರ್‌ಕೆ/21/69–70 ದಿನಾಂಕ:18.6.1969ರ ರೀತ್ಯಾ ನೋಂದಣಿಯಾಗಿದ್ದು. ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದು ಕೆಜಿಎಫ್ ಪ್ರದೇಶದ ಬಿ.ಇ.ಎಂ.ಎಲ್. ನಗರಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಸಂಘದ ಲೆಕ್ಕ ಪರಿಶೋಧನೆಯು 90–91ನೇ ಸಾಲುಗಳಿಂದ ನಡೆಯಲು ಬಾಕಿ ಇರುತ್ತದೆ. ಸಂಘದ ಆಡಳಿತ ಮಂಡಳಿ ಸಭೆಗಳು ಮತ್ತು ವಾರ್ಷಿಕ ಮಹಾಸಭೆಗಳು ನಡೆದಿರುವುದಿಲ್ಲ. ಸಂಘದ ಆಡಳಿತ ಮಂಡಳಿ ರಚನೆಯಾಗದೆ ಇದ್ದು ಸಂಘಕ್ಕೆ ಕಲಂ 28ಎ (5) ರ ರೀತ್ಯಾ ಆಡಳಿತಾಧಿಕಾರಿಯನ್ನು ನೇಮಕ ಮಾಡಿದ್ದು, ಸಂಘವು ಸ್ಥಗಿತಗೊಂಡ ಹಿನ್ನಲೆಯಲ್ಲಿ ಆಡಳಿತ ಮಂಡಳಿಯನ್ನು ಪುನರ್ ರಚನೆ ಮಾಡಲು ಸಾಧ್ಯವಾಗಿರುವುದಿಲ್ಲ ಡಿ.ಸಿ.ಸಿ ಬ್ಯಾಂಕ್ ನಿ., ಕೆಜಿಎಫ್ ಶಾಖೆಯಲ್ಲಿ ಸಂಘವು ಚಾಲ್ತಿ ಡಿಪಾಜಿಟ್ ಖಾತೆಯನ್ನು ಹೊಂದಿದ್ದು, ದಿನಾಂಕ:10–2–2006ಕ್ಕೆ ಇದ್ದಂತೆ ಸದರಿ ಖಾತೆಯಲ್ಲಿ 470–00 ರೂಗಳನ್ನು ಹೊಂದಿರುತ್ತದೆ. ಸದರಿ ಸಂಘಕ್ಕೆ ಸರ್ಕಾರದಿಂದ ಯಾವುದೇ ರೀತಿಯ ಆರ್ಥಿಕ ಸೌಲಭ್ಯ ಮಂಜೂರಾಗಿರುವುದಿಲ್ಲ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋಲಾರ, ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯಲ್ಲಿ ಸಲ್ಲಿಸಿರುತ್ತಾರೆ. ಆದ್ದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಆದ ನಾನು ಬಿ.ಇ.ಎಂ.ಎಲ್ ಬಳಕೆದಾರರ ಸಹಕಾರ ಸಂಘ ನಿ. ಬಿ.ಇ.ಎಂ,ಎಲ್, ನಗರ ಕೆ.ಜಿ.ಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಮತ್ತು ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:21.2.2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**
**ಸಂಖ್ಯೆ:ಡಿಆರ್‌ಕೆ/ಎಲ್‌ಕ್ಯೂಡಿ/ಸಿಆರ್6/2007–08, ದಿನಾಂಕ:21ನೇ ಫೆಬ್ರವರಿ 2008**

**ವಿಷಯ :** ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುವ ಗೊಲ್ಲಹಳ್ಳಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಕೆ.ಜಿ.ಎಫ್. ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಸಮಾಪನೆಗೆ ಒಳಪಡಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಪತ್ರ ಸಂಖ್ಯೆ:ಎಆರ್.49/ಎಲ್‌ಕ್ಯೂಡಿ/ಸಿಆರ್ 30/2005–06 ದಿನಾಂಕ:18.2.2006 ಮತ್ತು ದಿನಾಂಕ: 30.5.2006.

**ಪ್ರಸ್ತಾವನೆ:**

ಗೊಲ್ಲಹಳ್ಳಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ., ಕೆ.ಜಿಎಫ್. ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಆದೇಶದ ಸಂಖ್ಯೆಎಆರ್ ಕೆ/ಯೋಜನೆ/ಸಿಆರ್ 1/ರಿಜಿಸ್ಟ್ರೇಷನ್/17493/90–91 ದಿನಾಂಕ:5–5–1990 ರ ರೀತ್ಯಾ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ಇದ್ದು ಗೊಲ್ಲಹಳ್ಳಿ ಸೊಸೈಪಾಳ್ಯ ಕೆಳಗಿನ ಮಸ್ಕಂ, ಭಾರತ್ ಪುರಂ ಉತ್ತರ, ಭಾರತ್ ಪುರಂ ದಕ್ಷಿಣ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದೆ.

ಸಂಘವು 2000–01ರ ಅಂತ್ಯಕ್ಕೆ ಒಟ್ಟು 2119–25 ರೂಗಳಷ್ಟು ನಿವ್ವಳ ನಷ್ಟದಲ್ಲಿ ಮುಂದುವರೆದಿದೆ ಮಾಸಿಕ ಮತ್ತು ವಾರ್ಷಿಕ ಮಹಾಸಭೆಗಳನ್ನು ನಡೆಸಿರುವುದಿಲ್ಲ.

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಯಾವುದೇ ಪ್ರಯೋಜನ ಇಲ್ಲದಿರುವುದರಿಂದ ಸಂಘವನ್ನು ಋಣ ಸಮಾಪನೆಗೆ ಒಳಪಡಿಸಿ ಸಮಾಪನಾಧಿಕಾರಿಯನ್ನು ನೇಮಕ ಮಾಡಲು ಉಲ್ಲೇಖಿತ ಪತ್ರದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಕೋಲಾರ, ಉಪವಿಭಾಗ, ಕೋಲಾರ ಇವರು ಪ್ರಸ್ತಾವನೆಯಲ್ಲಿ ಸಲ್ಲಿಸಿರುತ್ತಾರೆ. ಆದುದರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೋಲಾರ ಉಪವಿಭಾಗ, ಕೋಲಾರ ಇವರ ಶಿಫಾರಸ್ಸನ್ನು ಪರಿಗಣಿಸಿ, ಈ ಸಂಘವನ್ನು ಋಣಸಮಾಪನೆಗೆ ಒಳಪಡಿಸುವುದು ಸೂಕ್ತವೆಂದು ಭಾವಿಸಿ ಸಂಘಕ್ಕೆ ಸಮಾಪನಾಧಿಕಾರಿಯನ್ನು ನೇಮಕ ಮಾಡಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ**

ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರಂತೆ ದತ್ತವಾದ ಅಧಿಕಾರವನ್ನು ಪ್ರಯೋಗಿಸಿ ಆರ್. ಶ್ರೀಧರ್, ಸಹಕಾರ ಸಂಘಗಳ ಉಪನಿಬಂಧಕರು, ಕೋಲಾರ ಜಿಲ್ಲೆ ಕೋಲಾರ ಆದ ನಾನು ಗೊಲ್ಲಹಳ್ಳಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿ. ಕೆ.ಜಿ.ಎಫ್ ಬಂಗಾರಪೇಟೆ ತಾಲ್ಲೂಕು ಈ ಸಹಕಾರ ಸಂಘವನ್ನು ಋಣಸಮಾಪನೆಗೊಳಿಸಿ ಸಂಘಕ್ಕೆ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಬಂಗಾರಪೇಟೆ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿ ಆದೇಶವನ್ನು ಹೊರಡಿಸಿರುತ್ತೇನೆ.

ಸಂಘದ ಸಮಾಪನಾಧಿಕಾರಿಗಳು ಸಂಘದ ಸಂಪೂರ್ಣ ಪ್ರಭಾರವನ್ನು ಪಡೆದು ಸಂಘದ ಆಸ್ತಿ ಜವಾಬ್ದಾರಿಗಳನ್ನು ವಿಲೇವಾರಿ ಮಾಡಿ 3 ತಿಂಗಳ ಒಳಗೆ ಸಂಘದ ನೋಂದಣಿಯನ್ನು ರದ್ದುಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಹಸ್ತ ಮತ್ತು ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ:21.2.2008 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಕೋಲಾರ ಜಿಲ್ಲೆ, ಕೋಲಾರ

